

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 129 (1302) |
| ಮಾನ್ಯ ಸದಸ್ಯರ ಹೆಸರು | ಶ್ರೀ ಪ್ರಕಾಶ್ ಕೆ. ರಾಥೋಡ್ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 23/09/2021 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣಕ್ಕಾಗಿ ಮೀಸಲಿಟ್ಟಿರುವ ಕಾರ್ಮಿಕ ಕಲ್ಯಾಣ ನಿಧಿಯ ಹಣವನ್ನು ಲಸಿಕೆ ಕಾರ್ಯಕ್ರಮಕ್ಕೆ ಉಪಯೋಗಿಸಿಕೊಳ್ಳಲಾಗಿದೆ: | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣಕ್ಕಾಗಿ ಮೀಸಲಿಟ್ಟಿರುವ ಕಾರ್ಮಿಕ ಕಲ್ಯಾಣ ನಿಧಿಯಿಂದ ಯಾವುದೇ ಹಣವನ್ನು ಕಾರ್ಮಿಕರಿಗೆ ಲಸಿಕೆ ನೀಡಲು ಉಪಯೋಗಿಸಿಕೊಂಡಿರುವುದಿಲ್ಲ. |
| ಆ) | ಕಾರ್ಮಿಕ ಕಲ್ಯಾಣ ಇಲಾಖೆಯ ಹಣವನ್ನು ಕಾರ್ಮಿಕರ ಕಲ್ಯಾಣಕ್ಕೆ ಅಲ್ಲದೆ ಇತರೆ ಯೋಜನೆಗಳಿಗೆ ಉಪಯೋಗಿಸುವುದು ಕಾರ್ಮಿಕರಿಗೆ ಅನ್ಯಾಯ ಮಾಡಿದಂತಾಗುವುದಿಲ್ಲವೆ? | ಕಾರ್ಮಿಕ ಕಲ್ಯಾಣ ಇಲಾಖೆಯ ಹಣವನ್ನು ಕಾರ್ಮಿಕರ ಕಲ್ಯಾಣಕ್ಕೆ ಅಲ್ಲದೆ ಇತರೆ ಯಾವುದೇ ಯೋಜನೆಗಳಿಗೆ ಉಪಯೋಗಿಸಲಾಗುತ್ತಿಲ್ಲ.<br><br>ಮಂಡಳಿಯಲ್ಲಿ ಸಂಗ್ರಹವಾಗಿರುವ ಸುಂಕ ಮೊತ್ತವನ್ನು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳ) ಕಾಯ್ದೆ, 1996 ರ ಕಲಂ 22 ರಲ್ಲಿ ಹಾಗೂ ಅದಕ್ಕೆ ಅನುಗುಣವಾಗಿ ರಚಿಸಲಾಗಿರುವ ಕರ್ನಾಟಕ ನಿಯಮಗಳು, 2006 ರಲ್ಲಿ ಇರುವ ನಿಯಮ 39 ರಿಂದ ನಿಯಮ 49 ಯೋಜನೆಗಳ ಅನುಷ್ಠಾನಕ್ಕಾಗಿ ಕಾಯ್ದೆ ಮತ್ತು ನಿಯಮಗಳಿಗನುಗುಣವಾಗಿ ಉಪಯೋಗಿಸಲಾಗುತ್ತಿದೆ.<br><br>ಮಂಡಳಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಭಿತರಿಗೆ ರೂಪಿಸಿರುವ ಸೌಲಭ್ಯಗಳ ವಿವರವನ್ನು ಅನುಬಂಧ ದಲ್ಲಿ ಲಗತ್ತಿಸಿದೆ.<br><br>ಇದಲ್ಲದೇ, ರಾಜ್ಯಾದ್ಯಾಂತ ಕೋವಿಡ್-19ರ ಒಂದನೇ ಮತ್ತು ಎರಡನೇ ಅಲೆಯ ತಡಯುವಿಕೆಗಾಗಿ ಲಾಕ್‌ಡೌನ್ ಅನ್ನು ಘೋಷಿಸಲಾಗಿದ್ದು, ಈ ಅವಧಿಯಲ್ಲಿ ಸಂಕಷ್ಟಕ್ಕೆ ಒಳಗಾದ ಕಾರ್ಮಿಕರಿಗೆ ನೆರವಾಗಲು ಮಂಡಳಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ: |

| ಒಂದನೇ ಅಲೆ | | | ಎರಡನೇ ಅಲೆ | | |
|---|---|---|---|---|---|
| ಸೌಲಭ್ಯ | ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ | ಬಿಡುಗಡೆ ಮಾಡಿದ ಒಟ್ಟು ಮೊತ್ತ | ಸೌಲಭ್ಯ | ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ | ಬಿಡುಗಡೆ ಮಾಡಿದ ಒಟ್ಟು ಮೊತ್ತ |
| ತಲಾ ರೂ.5000/- ನೇರ ನಗದು ವರ್ಗಾವಣೆ | 16,48,431 | ರೂ.824.21 ಕೋಟಿ | ತಲಾ ರೂ.3000/- ನೇರ ನಗದು ವರ್ಗಾವಣೆ | 18,20,703 | ರೂ.546.21 ಕೋಟಿ |
| ಆಹಾರ ಸಾಮಾಗ್ರಿಗಳ ಕಿಟ್‌ಗಳ ವಿತರಣೆ | 7.15 ಲಕ್ಷ | ರೂ.53.94 ಕೋಟಿ | ಆಹಾರ ಸಾಮಾಗ್ರಿಗಳ ಕಿಟ್‌ಗಳ ವಿತರಣೆ | 23.42 ಲಕ್ಷ | ರೂ.227.41 ಕೋಟಿ |
| ಸಿದ್ದಪಡಿಸಿದ ಆಹಾರ ವಿತರಣೆ | 89.87 ಲಕ್ಷ | ರೂ.26.71 ಕೋಟಿ | ರಕ್ಷಣಾ ಮತ್ತು ನೈರ್ಮಲ್ಯೀಕರಣ ಕಿಟ್‌ಗಳ ವಿತರಣೆ | 21.07 ಲಕ್ಷ | ರೂ.118.69 ಕೋಟಿ |

**ಕಾಇ 415 ಎಲ್‌ಇಟಿ 2021**

(ಅರಬೈಲ್ ಶಿವರಾಮ ಹೆಬ್ಬಾರ್)
ಕಾರ್ಮಿಕ ಸಚಿವರು

## ಅನುಬಂಧ

## ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ ( ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ ( ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | **ಪದವಿ ಪೂರ್ವ** | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ<br>2 ವರ್ಷ ಅವಧಿಗೆ ಒಳಪಟ್ಟು |

| ತಾಂತ್ರೀಕ/ ವೈದ್ಯಕೀಯ ಎನ್‌ಇಇಟಿ ಅಥವಾ ಕೆಸಿಇಟಿ | | |
|---|---|---|
| 12 | ಬಿಇ / ಬಿ.ಟೆಕ್ ಅಥವಾ ಸಂಬಂಧಪಟ್ಟ ಯೂಜಿ ಕೋರ್ಸ್ | ಸದರಿ ಕೋರ್ಸ್‌ನ ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರ ಕೋರ್ಸ್) | ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕ ರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್ ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರ ಕೋರ್ಸ್ | ರೂ.60,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆ ಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್ ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋದನಾ ಶುಲ್ಕ |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)**: ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**
13. **ಅಪಘಾತ ಪರಿಹಾರ**: ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/-** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ)**: ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-ವರೆಗೆ**
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ)**: ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ**: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯ ಧನ.